ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ರಾಜ್ಯದಲ್ಲಿ ಅಂತರ್ಜಲ ಮಟ್ಟ ಪಾತಾಳಕ್ಕೆ ಕುಸಿದಿರುವ ಸಮಸ್ಯೆ ಬಗ್ಗೆ

ಶ್ರೀ ಕೆ. ಗೋವಿಂದರಾಜ್ (ವಿಧಾನಸಭೆಯಿಂದ ಚುನಾಯಿತರಾದವರು) :-

148 (73) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಅಂತರ್ಜಲ ಮಟ್ಟ ಪಾತಾಳಕ್ಕೆ ಕುಸಿದಿರುವುದು ಹಾಗೂ ವರ್ಷದಿಂದ ವರ್ಷಕ್ಕೆ ವಿರಳವಾಗುತ್ತಿರುವ ಮಳೆಗಾಲ ಅಂತರ್ಜಲಕ್ಕೆ ಹೊಡತ ನೀಡುತ್ತಿರುವುದು ಹಾಗೂ ನಗರಗಳಲ್ಲಿನ ಡಾಂಬರೀಕರಣದಿಂದಾಗಿ ನೀರು ಇಂಗಲು ಜಾಗವೇ ಇಲ್ಲದೆ ಮಳೆ ನೀರು ಚರಂಡಿಗೆ ಸೇರಿ ವ್ಯರ್ಥವಾಗುತ್ತಿರುವುದನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆಯೇ ; ಹಾಗಿದ್ದಲ್ಲಿ, ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿ ಒದಗಿಸುವುದು ;

(ಆ) ಭೂಮಿಯಲ್ಲಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಅಂತರ್ಜಲ ಪ್ರಮಾಣವನ್ನು ಪರಿಣಾಮಕಾರಿಯಾಗಿ ಹೆಚ್ಚಿಸಲು ಸರ್ಕಾರ ಯಾವ ಮಾರ್ಗೋಪಾಯಗಳನ್ನು ಅನುಸರಿಸುತ್ತಿದೆ ; ಹಾಗೂ ಈ ನಿಟ್ಟಿನಲ್ಲಿ ಒದಗಿಸಲಾದ ಹಾಗೂ ವಿನಿಯೋಗಿಸಲಾದ ಅನುದಾನ ಎಷ್ಟು; (ವಿವರಗಳನ್ನು ನೀಡುವುದು)

(ಇ) ಇತರೆ ದೇಶ ರಾಜ್ಯಗಳಲ್ಲಿ ಅಂತರ್ಜಲ ಪ್ರಮಾಣವನ್ನು ಹೆಚ್ಚಿಸುವ ನಿಟ್ಟಿನಲ್ಲಿ ಕೈಗೊಂಡಿರಬಹುದಾದ ವಿಶೇಷ ಯೋಜನೆಗಳನ್ನು ಸರ್ಕಾರವು ಅನುಸರಿಸುವುದೇ ; ಹಾಗಿದ್ದಲ್ಲಿ, ಈ ನಿಟ್ಟಿನಲ್ಲಿ ಕೈಗೊಂಡಿರುವ ಕ್ರಮಗಳ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸುವುದು ?